ಗಣಕೀಯಂತ್ರಾಗಾರ
06/3/2020
STD

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 398
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ, ನಗರ ಸಾರಿಗೆ ಹಾಗೂ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಬಸ್‌ಗಳಲ್ಲಿ ವಿದ್ಯಾರ್ಥಿಗಳಿಗೆ ರಿಯಾಯಿತಿ ಬಸ್‌ಪಾಸ್ ಸೌಲಭ್ಯಗಳನ್ನು ಕಲ್ಪಿಸಲಾಗಿದೆಯೇ: | ಸಾರಿಗೆ ಸಂಸ್ಥೆಗಳ ಬಸ್‌ಗಳಲ್ಲಿ ವಿದ್ಯಾರ್ಥಿಗಳಿಗೆ ರಿಯಾಯಿತಿ / ಉಚಿತ ಬಸ್ ಪಾಸ್ ಸೌಲಭ್ಯವನ್ನು ಕಲ್ಪಿಸಲಾಗಿದೆ. |
| ಆ | ರಿಯಾಯಿತಿ ಬಸ್‌ಪಾಸ್ ಸೌಲಭ್ಯವನ್ನು ನೀಡುವಲ್ಲಿ ಅನುಸರಿಸಲಾಗುತ್ತಿರುವ ಮಾನದಂಡಗಳೇನು; (ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ನಗರ ಸಾರಿಗೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆವಾರು ಪ್ರತ್ಯೇಕವಾಗಿ ವಿವರ ನೀಡುವುದು) | ಸಾರಿಗೆ ಸಂಸ್ಥೆಗಳು ವಿದ್ಯಾರ್ಥಿ ಬಸ್ ಪಾಸ್ ವಿತರಣೆಯಲ್ಲಿ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸುತ್ತಿವೆ.<br>1. ವಿದ್ಯಾರ್ಥಿಯು ಕರ್ನಾಟಕ ಸರ್ಕಾರ / ಭಾರತ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳು/ ವಿಶ್ವವಿದ್ಯಾನಿಲಯಗಳ ಪೂರ್ಣಾವಧಿ ಕೋರ್ಸುಗಳಲ್ಲಿ ಅಭ್ಯಸಿಸುತ್ತಿರಬೇಕು.<br>2. ವಿದ್ಯಾರ್ಥಿಗಳು ವಾಸಸ್ಥಳದಿಂದ ವಿದ್ಯಾಸಂಸ್ಥೆವರೆಗೆ ಪ್ರಯಾಣಿಸಲು, ಗರಿಷ್ಠ ಪ್ರಯಾಣ ಮಿತಿ 60 ಕಿ.ಮೀವರೆಗೆ ವಿದ್ಯಾರ್ಥಿ ಬಸ್ ಪಾಸ್ ವಿತರಿಸಲಾಗುತ್ತಿದೆ.<br>3. ಭರ್ತಿಗೊಳಿಸಿದ ಅರ್ಜಿಯನ್ನು ಶಾಲೆ / ಕಾಲೇಜಿನ ಮುಖ್ಯಸ್ಥರಿಂದ ದೃಢೀಕರಿಸಿರಬೇಕು.<br>4. ಪ್ರಸಕ್ತ ಸಾಲಿನಲ್ಲಿ ವಿದ್ಯಾಸಂಸ್ಥೆಗೆ ಶುಲ್ಕ ಪಾವತಿಸಿರುವ ರಸೀದಿಯನ್ನು ಹಾಜರುಪಡಿಸಬೇಕು. ಶಾಲಾ/ಕಾಲೇಜಿನ ಗುರುತಿನ ಚೀಟಿಯನ್ನು ಪಾಸು ಪಡೆಯುವ ವೇಳೆ ಹಾಜರುಪಡಿಸುವುದು.<br>5. ಉಚಿತ ಬಸ್ ಪಾಸ್‌ದಾರರು ನಿಗದಿತ ಸಂಸ್ಕರಣಾ ಶುಲ್ಕ ಮತ್ತು ಅಪಘಾತ ಪರಿಹಾರ ನಿಧಿ ಶುಲ್ಕವನ್ನು (ಪ್ರಸ್ತುತ ರೂ.150/-) ಪಾವತಿಸುವುದು.<br>6. ರಿಯಾಯಿತಿ ಬಸ್‌ಪಾಸ್‌ದಾರರು ನಿಗದಿತ ಪಾಸಿನ ಶುಲ್ಕ, ಸಂಸ್ಕರಣಾ ಶುಲ್ಕ ಹಾಗೂ ಅಪಘಾತ ಪರಿಹಾರ ನಿಧಿ ಶುಲ್ಕವನ್ನು ಪಾವತಿಸುವುದು.<br>7. 2017-18 ನೇ ಸಾಲಿನಿಂದ ಸರ್ಕಾರದ ಆದೇಶದನ್ವಯ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್ ಪಾಸ್ ವಿತರಣೆ ಮಾಡುತ್ತಿರುವುದರಿಂದ, ಸದರಿ ವರ್ಗದ ವಿದ್ಯಾರ್ಥಿಗಳು ಕಡ್ಡಾಯವಾಗಿ ಜಾತಿ ಪ್ರಮಾಣ ಪತ್ರದ ಪ್ರತಿಯನ್ನು ಲಗತ್ತಿಸಬೇಕು. ದಾಖಲಾತಿ ಪರಿಶೀಲನೆಗೆ ಮೂಲ ಜಾತಿ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು.<br>8. ನಿಗಮದ ಬಸ್ಸುಗಳ ಆಚರಣೆ ಇರುವ ಮಾರ್ಗಗಳಿಗೆ ಮಾತ್ರ ಬಸ್ ಪಾಸ್‌ಗಳನ್ನು ವಿತರಿಸಲಾಗುವುದು.<br><br>ಇವುಗಳೊಂದಿಗೆ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸುವ ವಿಧಾನದಲ್ಲಿ ಈ ಕೆಳಕಂಡಂತೆ ಮಾನದಂಡಗಳನ್ನು ಅನುಸರಿಸುತ್ತಿದೆ.<br>1. ವಿದ್ಯಾರ್ಥಿಗಳು ಪಾಸಿಗಾಗಿ ಸಂಸ್ಥೆಯ ವೆಬ್‌ಸೈಟ್ www.mybmtc.com ನಲ್ಲಿ ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡಿ ಪ್ರಸ್ತುತ ಸಾಲಿನ ಶಾಲಾ/ಕಾಲೇಜಿನ ಶುಲ್ಕ ರಸೀದಿ ಮತ್ತು ಭಾವಚಿತ್ರವನ್ನು ಅಪ್‌ಲೋಡ್ ಮಾಡಿ ಸಲ್ಲಿಸುವುದು.<br>2. ವಿದ್ಯಾರ್ಥಿಗಳು ಸಲ್ಲಿಸಿದ ಅರ್ಜಿಗಳನ್ನು (ರಾಜ್ಯ ಪಠ್ಯಕ್ರಮ ಅಭ್ಯಸಿಸುವ ವಿದ್ಯಾರ್ಥಿಗಳನ್ನು ಹೊರತುಪಡಿಸಿ) ಶಾಲಾ/ಕಾಲೇಜು ನೋಡಲ್ ಅಧಿಕಾರಿಗಳು ಪರಿಶೀಲಿಸಿ ಆನ್‌ಲೈನ್ ಮೂಲಕವೇ ಅನುಮೋದನೆಯನ್ನು ನೀಡುವುದು. |

3. ರಾಜ್ಯ ಪಠ್ಯಕ್ರಮ ಅಭ್ಯಸಿಸುವ ವಿದ್ಯಾರ್ಥಿಗಳಿಗಾಗಿ ನಿಗಧಿತ ಅರ್ಜಿಯನ್ನು ನೀಡಿದ್ದು, ಸದರಿ ಅರ್ಜಿಗಳನ್ನು ವಿದ್ಯಾರ್ಥಿಗಳು ಭರ್ತಿ ಮಾಡಿ, ಶಾಲೆಯ ಮುಖ್ಯಸ್ಥರಿಂದ ದೃಡೀಕರಿಸಿ, ನಂತರ ಸ್ಕ್ಯಾನ್ ಮಾಡಿ ಆನ್‌ಲೈನ್ ಅರ್ಜಿಯಲ್ಲಿ ಅಪ್‌ಲೋಡ್ ಮಾಡುವುದು. ಸದರಿ ವಿದ್ಯಾರ್ಥಿಗಳ ಅರ್ಜಿಯನ್ನು ಬೆಂ.ಮ.ಸಾ.ಸಂಸ್ಥೆಯಿಂದ ಪರಿಶೀಲಿಸಿ ಅನುಮೋದಿಸಲಾಗುತ್ತಿದೆ.
4. ಈ ರೀತಿ ಅನುಮೋದನೆ ದೊರೆತ ನಂತರ ವಿದ್ಯಾರ್ಥಿಗಳು ಪಾಸ್ ಪಡೆಯುವ ಬಸ್ ನಿಲ್ದಾಣ, ದಿನಾಂಕ, ಸಮಯವನ್ನು ನಿಗಧಿಪಡಿಸಿಕೊಂಡು, ಅದರಂತೆ ಬಸ್ ನಿಲ್ದಾಣಕ್ಕೆ ಬಂದು ಪಾಸಿನ ಮೊತ್ತ ಮತ್ತು ಸೇವಾ ಶುಲ್ಕವನ್ನು ಪಾವತಿಸಿ ವಿದ್ಯಾರ್ಥಿ ಪಾಸನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ.
5. ಸಂಸ್ಥೆಯು ಕಾರ್ಯಾಚರಣೆ ಮಾಡುವ ಮಾರ್ಗಗಳಿಗೆ ಮಾತ್ರ ಬಸ್ ಪಾಸುಗಳನ್ನು ವಿತರಿಸಲಾಗುವುದು.

ಇ ಕಳೆದ ಮೂರು ವರ್ಷಗಳಲ್ಲಿ ಈ ಸೌಲಭ್ಯ ಪಡೆದಿರುವ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಎಷ್ಟು; (ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ನಗರ ಸಾರಿಗೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆವಾರು ಪ್ರತ್ಯೇಕವಾಗಿ ವಿವರ ನೀಡುವುದು)

ಕಳೆದ ಮೂರು ವರ್ಷಗಳಲ್ಲಿ ಈ ಸೌಲಭ್ಯ ಪಡೆದಿರುವ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ಈ ಕೆಳಕಂಡಂತಿವೆ.

| ವರ್ಷ | ಕರಾರಸಾನಿ | ಬೆಂಮಸಾಸಂ | ವಾಕರಸಾಸಂ | ಈಕರಸಾಸಂ |
|---|---|---|---|---|
| 2017-18 | 625000 | 373101 | 4,92,027 | 349550 |
| 2018-19 | 625064 | 335770 | 4,94,570 | 365105 |
| 2019-20 (ಜನವರಿ 2020 ರವರೆಗೆ) | 606464 | 344718 | 4,80,885 | 373807 |

ಈ ಕಳೆದ 03 ವರ್ಷಗಳಿಂದ ರಿಯಾಯಿತಿ ಬಸ್‌ಪಾಸುಗಳ ವಿತರಣೆಯಿಂದ ಇಲಾಖೆಗೆ ಸಂದಾಯವಾದ ಮೊತ್ತವೆಷ್ಟು; (ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ನಗರ ಸಾರಿಗೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆವಾರು ಪ್ರತ್ಯೇಕವಾಗಿ ವಿವರ ನೀಡುವುದು)

ಸಾರಿಗೆ ಸಂಸ್ಥೆಗಳಿಗೆ ವಿದ್ಯಾರ್ಥಿ ರಿಯಾಯಿತಿ ಬಸ್ ಪಾಸ್ ವಿತರಣೆಯಿಂದ ಕಳೆದ 03 ವರ್ಷಗಳಲ್ಲಿ ವಿದ್ಯಾರ್ಥಿಗಳಿಂದ ಸಂದಾಯವಾಗಿರುವ ಮೊತ್ತದ ವಿವರಗಳು ಈ ಕೆಳಕಂಡಂತಿದೆ.

(ರೂ.ಕೋಟಿಗಳಲ್ಲಿ)

| ವರ್ಷ | ಕರಾರಸಾನಿ | ಬೆಂಮಸಾಸಂ | ವಾಕರಸಾಸಂ | ಈಕರಸಾಸಂ |
|---|---|---|---|---|
| 2017-18 | 34.17 | 31.00 | 28.13 | 15.77 |
| 2018-19 | 34.29 | 26.30 | 28.55 | 16.05 |
| 2019-20 (ಜನವರಿ2020 ರವರಗೆ) | 33.22 | 27.81 | 27.06 | 16.70 |

ಉ ವಿದ್ಯಾರ್ಥಿಗಳಿಗೆ ಉಚಿತ ಬಸ್‌ಪಾಸ್ ಸೌಲಭ್ಯವನ್ನು ಕಲ್ಪಿಸಲು ಸರ್ಕಾರ ಚಿಂತಿಸಿದೆಯೇ:

ಊ ಯಾವ ಕಾಲಮಿತಿಯಲ್ಲಿ ಉಚಿತ ಬಸ್‌ಪಾಸ್ ಸೌಲಭ್ಯವನ್ನು ಕಲ್ಪಿಸಲಾಗುವುದು?

ಸಾರಿಗೆ ಸಂಸ್ಥೆಗಳು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಮತ್ತು ಎಲ್ಲಾ ತರಗತಿಯ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್ ಪಾಸುಗಳನ್ನು ವಿತರಿಸುತ್ತಿದೆ.

ಸಂಖ್ಯೆ: ಟಿಡಿ 37 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು